# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 202 (243) |
| ಸದಸ್ಯರ ಹೆಸರು | ಶ್ರೀ ಮರಿತಿಬ್ಬೇಗೌಡ |
| ಉತ್ತರಿಸುವ ದಿನಾಂಕ: | 04.03.2020 |
| ಉತ್ತರಿಸುವವರು | ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ | ಮುಜರಾಯಿ ದೇವಾಲಯಗಳಲ್ಲಿ ಉಚಿತ ಸರಳ ವಿವಾಹಗಳನ್ನು ಉತ್ತೇಜಿಸಲು ಸರ್ಕಾರ ಯಾವುದಾದರೂ ಯೋಜನೆಯನ್ನು ಸೂಚಿಸಿದೆಯೇ; (ವಿವರ ನೀಡುವುದು) | ಮುಜರಾಯಿ ದೇವಾಲಯಗಳಲ್ಲಿ ಉಚಿತ ಸರಳ ವಿವಾಹಗಳನ್ನು ಉತ್ತೇಜಿಸಲು ಸರ್ಕಾರವು "ಸಪ್ತಪದಿ" ಸಾಮೂಹಿಕ ಸರಳ ವಿವಾಹ ಕಾರ್ಯಕ್ರಮವನ್ನು ರೂಪಿಸಲಾಗಿದೆ.<br>**(ವಿವರ ಅನುಬಂಧದಲ್ಲಿ ಒದಗಿಸಿದೆ)** |
| ಆ | ನಿಗದಿಪಡಿಸಲಾದ ಅನುದಾನದ ಮೊತ್ತವೆಷ್ಟು; | ಈ ಕಾರ್ಯಕ್ರಮದಲ್ಲಿ ವಿವಾಹವಾಗುವ ಪ್ರತಿಜೋಡಿಗೆ ಈ ಕೆಳಕಂಡಂತೆ ಆಯಾಯ ದೇವಾಲಯದ ವತಿಯಿಂದ ಪಾವತಿಸಲು ನಿಗದಿಪಡಿಸಿದೆ. (see table below) |
| ಇ | ಸದರಿ ಯೋಜನೆಯಲ್ಲಿ ಇದುವರೆವಿಗೂ ಎಷ್ಟು ಉಚಿತ ಸರಳ ವಿವಾಹಗಳನ್ನು ಮಾಡಲಾಗಿದೆ; | ಸಾಮೂಹಿಕ ವಿವಾಹ ಯೋಜನೆಯನ್ನು ಪ್ರಪ್ರಥಮವಾಗಿ ಜಾರಿಗೆ ತಂದಿದ್ದು, ಈ ಕೆಳಕಂಡ ದಿನಾಂಕಗಳಂದು ನಡೆಸಲು ಉದ್ದೇಶಿಸಲಾಗಿದೆ. (see table below)<br>ಸದರಿ ಯೋಜನೆಯಡಿ ಇದುವರೆವಿಗೂ ಉಚಿತ ಸರಳ ವಿವಾಹಗಳನ್ನು ಮಾಡಿರುವುದಿಲ್ಲ. |

| ಕ್ರ. ಸಂ | ವಿವರ | ಮೊತ್ತ (ರೂ.ಗಳಲ್ಲಿ) |
|---|---|---|
| 1 | ವರನಿಗೆ ಪ್ರೋತ್ಸಾಹಧನ (ಹೂವಿನ ಹಾರ, ಪಂಚೆ, ಶರ್ಟ್ ಮತ್ತು ಶಲ್ಯಕ್ಕಾಗಿ) | 5,000 |
| 2 | ವಧುವಿಗೆ ಪ್ರೋತ್ಸಾಹಧನ (ಹೂವಿನ ಹಾರ, ಧಾರೆ ಸೀರೆ ಮತ್ತು ರವಿಕೆಕಣಕ್ಕಾಗಿ) | 10,000 |
| 3 | ವಧುವಿಗೆ ಚಿನ್ನದ ತಾಳಿ, ಎರಡು ಚಿನ್ನದಗುಂಡು(ಅಂದಾಜು 8 ಗ್ರಾಂತೂಕ) | 40,000 |
| | ಒಟ್ಟು | 55,000 |

| ಕ್ರ. ಸಂ | ಮಾಹೆ | ದಿನಾಂಕ |
|---|---|---|
| 1 | ಏಪ್ರಿಲ್ | 26-04-2020 |
| 2 | ಮೇ | 24-05-2020 |

| | | |
|---|---|---|
| ಈ | ಸದರಿ ವಿವಾಹ ಪದ್ಧತಿಯಲ್ಲಿನ ಮಾರ್ಗಸೂಚಿಗಳೇನು; (ವಿವರ ನೀಡುವುದು) | ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆಯ ಸುತ್ತೋಲೆ ಸಂಖ್ಯೆ ಎಡಿಎಂ 11 ಸಿಆರ್ 136 2019-20 ದಿನಾಂಕ:22.11.2019ರಲ್ಲಿನ ಮಾರ್ಗಸೂಚಿಯನ್ವಯ "ಸಪ್ತಪದಿ" ಸಾಮೂಹಿಕ ಸರಳ ವಿವಾಹ ಕಾರ್ಯಕ್ರಮವನ್ನು ನಡೆಸಲಾಗುತ್ತಿದೆ. **(ವಿವರ ಅನುಬಂಧದಲ್ಲಿ ಒದಗಿಸಿದೆ)** |
| ಉ | ಸದರಿ ಯೋಜನೆಗೆ ಧಾರ್ಮಿಕ ಇಲಾಖೆಯ ಹಣ ಅಥವಾ ಸರ್ಕಾರದ ವಿಶೇಷ ಅನುದಾನವನ್ನು ಉಪಯೋಗಿಸಲಾಗುವುದೇ? | ಸದರಿ ಯೋಜನೆಗೆ ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಯಲ್ಲಿನ ಆಯ್ಕೆಯಾಗಿರುವ ದೇವಾಲಯಗಳ ನಿಧಿಯನ್ನು ಉಪಯೋಗಿಸಿಕೊಳ್ಳಲಾಗುವುದು. |

(ಸಂಖ್ಯೆಕಂಇ 07 ಮುಸಪ್ರ 2020)

**(ಕೋಟಾ ಶ್ರೀನಿವಾಸ ಪೂಜಾರಿ)**
ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು
ಮತ್ತು ಒಳನಾಡು ಜಲಸಾರಿಗೆ ಸಚಿವರು



ಕರ್ನಾಟಕ ಸರ್ಕಾರ

ಆಯುಕ್ತರ ಕಾರ್ಯಾಲಯ, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ,
4ನೇ ಮಹಡಿ, ಶ್ರೀ ಮಿಂಟೋ ಆಂಜನೇಯಸ್ವಾಮಿ ಭವನ, ಆಲೂರು ವೆಂಕಟರಾವ್‌ರಸ್ತೆ, ಚಾಮರಾಜಪೇಟೆ, ಬೆಂಗಳೂರು
ದೂರವಾಣಿ:26709689/26706775 ಫ್ಯಾಕ್ಸ್ :26700801, Email . endowmentcommissioner@gmail.com

ಸಂಖ್ಯೆಎಡಿಎಂ 11/ಸಿಆರ್/136/2019-20 ದಿನಾಂಕ: 22.11.2019

## ಸುತ್ತೋಲೆ

ವಿಷಯ: ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಗೆ ಒಳಪಡುವ ಪ್ರಮುಖ ದೇವಾಲಯಗಳಲ್ಲಿ ಸಾಮೂಹಿಕ ವಿವಾಹಗಳನ್ನು ನಡೆಸುವ ಬಗ್ಗೆ.

ಉಲ್ಲೇಖ:- 1) ಮಾನ್ಯ ಮುಜರಾಯಿ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ:31-10-2019ರಂದು ನಡೆದ ಸಭೆಯ ನಡವಳಿ.
2) ಸರ್ಕಾರದ ಪತ್ರ ಸಂಖ್ಯೆಕಂಇ 22 ಮುಇವಿ 2019(ಇ) ದಿನಾಂಕ:11-11-2019

* * *

ಮಾನ್ಯ ಮುಜರಾಯಿ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ:31-10-2019ರಂದು ಸಭೆಯಲ್ಲಿ ಧಾರ್ಮಿಕ ದತ್ತಿ ಇಲಾಖಾ ವ್ಯಾಪ್ತಿಗೆ ಒಳಪಡುವ ಉತ್ತಮ ಆದಾಯವಿರುವ 100 ಪ್ರವರ್ಗ 'ಎ' ದೇವಾಲಯಗಳಲ್ಲಿ (ಅನುಬಂಧದಲ್ಲಿರುವ) ಮೂಲಭೂತ ಸೌಕರ್ಯಗಳಾದ ಕಲ್ಯಾಣ ಮಂಟಪ, ಶೌಚಾಲಯ, ಕುಡಿಯುವ ನೀರಿನ ವ್ಯವಸ್ಥೆ, ಖಾಲಿ ಇರುವ ಸ್ಥಳ ಹಾಗೂ ಅನ್ನದಾಸೋಹ ವ್ಯವಸ್ಥೆ ಇರುವ ದೇವಾಲಯಗಳಲ್ಲಿ ಸಾಮೂಹಿಕ ವಿವಾಹಗಳನ್ನು ಕೆಲವು ಷರತ್ತುಗಳಿಗೊಳಪಟ್ಟು ನಡೆಸಲು ನಿರ್ಣಯಿಸಲಾಗಿರುತ್ತದೆ.

ಸರ್ಕಾರದ ಉಲ್ಲೇಖಿತ (2)ರ ಪತ್ರದಲ್ಲಿ ಮಾನ್ಯ ಮುಜರಾಯಿ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ:31-10-2019ರಂದು ನಡೆದ ಸಭೆಯ ನಿರ್ಣಯದಂತೆ ಧಾರ್ಮಿಕ ದತ್ತಿ ಇಲಾಖಾ ವ್ಯಾಪ್ತಿಯಲ್ಲಿ ಬರುವ ಪ್ರವರ್ಗ "ಎ" ಅಧಿಸೂಚಿತ ಆಯ್ದ ದೇವಾಲಯಗಳಲ್ಲಿ ಸಾಮೂಹಿಕ ವಿವಾಹ ನಡೆಸುವ ಬಗ್ಗೆ ಸುತ್ತೋಲೆ ಹೊರಡಿಸುವ ಕುರಿತು ಹಾಗೂ ಸಾಮೂಹಿಕ ವಿವಾಹ ಯೋಜನೆಯ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳಲು ನಿರ್ದೇಶಿಸಲಾಗಿರುತ್ತದೆ.

ಮಾನ್ಯ ಮುಜರಾಯಿ ಸಚಿವರ ಉಲ್ಲೇಖಿತ (1)ರ ಸಭೆಯ ನಡವಳಿ ಮತ್ತು ಉಲ್ಲೇಖಿತ (2)ರ ಸರ್ಕಾರದ ಪತ್ರದ ನಿರ್ದೇಶನದಂತೆ ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಉತ್ತಮ ಆದಾಯವಿರುವ ಅನುಬಂಧದಲ್ಲಿರುವ ನೀತಿ ಸಂಹಿತಿಗೆ ಒಳಪಡದಿರುವ ಪ್ರವರ್ಗ "ಎ" ಅಧಿಸೂಚಿತ ದೇವಾಲಯಗಳಲ್ಲಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸಾಮೂಹಿಕ ವಿವಾಹ ನಡೆಸಲು ಸೂಚಿಸಿದೆ.

### -: ಷರತ್ತುಗಳು :-

1) ಸಂಬಂಧಪಟ್ಟ ದೇವಾಲಯಗಳ ಕಾರ್ಯನಿರ್ವಾಹಕ ಅಧಿಕಾರಿಗಳು/ ಆಡಳಿತಾಧಿಕಾರಿಗಳು / ಅನುವಂಶಿಕ ಮೊಕ್ತೇಸರರು/ ಜಿಲ್ಲಾಧಿಕಾರಿಗಳ /ಜಿಲ್ಲಾ ಧಾರ್ಮಿಕ ಪರಿಷತ್ತಿನ ಅಧ್ಯಕ್ಷರ ಅನುಮತಿ ಪಡೆದು ಈ ಕೆಳಕಂಡ ದಿನಾಂಕಗಳಲ್ಲಿ ಅನುಕೂಲವಾಗುವ ಯಾವುದಾದರೂ ಒಂದು ದಿನಾಂಕದಂದು ಸಾಮೂಹಿಕ ವಿವಾಹವನ್ನು ನಡೆಸಲು ದಿನಾಂಕ ನಿಗದಿಪಡಿಸುವುದು.

| ಕ್ರ. ಸಂ | ಮಾಹೆ | ದಿನಾಂಕ |
|---|---|---|
| 1 | ಏಪ್ರಿಲ್ | 26-04-2020 |
| 2 | ಮೇ | 24-05-2020 |

2

2) ಸಾಮೂಹಿಕ ವಿವಾಹದಲ್ಲಿ ಪಾಲ್ಗೊಳ್ಳುವವರು ದೇವಾಲಯದ ಕಛೇರಿಗಳಿಗೆ ಬಂದು ಅರ್ಜಿ ಪಡೆದು, ದಾಖಲೆಗಳನ್ನು ನೀಡಿ ವಿವಾಹ ನಡೆಯುವ ದಿನಾಂಕಕ್ಕೆ 30 ದಿನಗಳ ಮುಂಚಿತವಾಗಿ ನೋಂದಾಯಿಸಿಕೊಳ್ಳುವುದು (ವಧು-ವರರ ಫೋಟೋ, ಜನನ ಪ್ರಮಾಣ ಪತ್ರ/ಎಸ್.ಎಸ್.ಎಲ್.ಸಿ. ಅಂಕಪಟ್ಟಿ/ ಆಧಾರ್ ಕಾರ್ಡ್ ಹಾಗೂ ಪಂಚಾಯತ್ / ನಗರಸಭೆ / ಪುರಸಭೆ/ ಮಹಾನಗರಪಾಲಿಕೆಯವರಿಂದ ಅವಿವಾಹಿತ ದೃಢೀಕರಣ ಪತ್ರ)

3) ಸಾಮೂಹಿಕ ವಿವಾಹಕ್ಕೆ ನೊಂದಾಯಿಸಿರುವ ವಧು-ವರರ ವಿವರಗಳನ್ನು ದೇವಾಲಯದ ಕಛೇರಿಯಲ್ಲಿ ವಿವಾಹ ದಿನಾಂಕಕ್ಕೆ 25 ದಿನಗಳ ಮುಂಚಿತವಾಗಿ ಪ್ರಕಟಿಸುವುದು. ಈ ಬಗ್ಗೆ ಆಕ್ಷೇಪಣೆಗಳನ್ನು ಸಲ್ಲಿಸುವವರು ವಿವಾಹ ನಡೆಯುವ ದಿನಾಂಕಕ್ಕಿಂತ 20 ದಿನಗಳ ಮುಂಚಿತವಾಗಿ ದೇವಾಲಯದ ಕಛೇರಿಗೆ ಸಲ್ಲಿಸುವುದು. ಆ ನಂತರ ಸ್ವೀಕೃತವಾಗುವ ಆಕ್ಷೇಪಣೆಗಳನ್ನು ಪರಿಗಣಿಸುವಂತಿಲ್ಲ. ಸ್ವೀಕೃತವಾದ ಆಕ್ಷೇಪಣೆಗಳನ್ನು ಪರಿಶೀಲಿಸಿ, ಅಂತಿಮ ವಧುವರರ ಪಟ್ಟಿಯನ್ನು 15 ದಿನಗಳ ಮುಂಚಿತವಾಗಿ ಪ್ರಚುರಪಡಿಸುವುದು.

| ಕ್ರ. ಸಂ | ವಿವರ | ಏಪ್ರಿಲ್-2020 | ಮೇ-2020 | ಕಾಲಾವಕಾಶ |
|---|---|---|---|---|
| 1 | ವಿವಾಹ ನಡೆಯುವ ದಿನಾಂಕ | 26-04-2020 | 24-05-2020 | - |
| 2 | ವಧು-ವರರು ನೊಂದಾಯಿಸಿಕೊಳ್ಳಲು ಕಡೆಯ ದಿನಾಂಕ | 27-03-2020 | 24-04-2020 | 30 ದಿನ ಮುಂಚಿತವಾಗಿ |
| 3 | ನೊಂದಾಯಿಸಿಕೊಂಡಿರುವ ವಧು-ವರರ ವಿವರಗಳನ್ನು ದೇವಾಲಯದಲ್ಲಿ ಪ್ರಕಟಿಸಬೇಕಾದ ದಿನಾಂಕ | 01-04-2020 | 29-04-2020 | 25 ದಿನ ಮುಂಚಿತವಾಗಿ |
| 4 | ವಧು-ವರರ ಪಟ್ಟಿಗೆ ಆಕ್ಷೇಪಣೆ ಸಲ್ಲಿಸಲು ಕೊನೆಯ ದಿನಾಂಕ | 06-04-2020 | 04-05-2020 | 20 ದಿನ ಮುಂಚಿತವಾಗಿ |
| 5 | ಅಂತಿಮ ವಧು-ವರರ ಪಟ್ಟಿ ಪ್ರಕಟಿಸುವ ದಿನಾಂಕ | 11-04-2020 | 09-05-2020 | 15 ದಿನ ಮುಂಚಿತವಾಗಿ |

4) ವಧು-ವರರ ಎರಡು ಕಡೆಯ ತಂದೆ-ತಾಯಿಯವರು ವಿವಾಹಕ್ಕೆ ಒಪ್ಪಿ, ವಿವಾಹ ದಿನದಂದು ತಂದೆ-ತಾಯಿ ಉಪಸ್ಥಿತಿ ಹಾಗೂ ಎರಡು ಕಡೆಯಿಂದ ಸಾಕ್ಷಿದಾರರು ಇದ್ದಲ್ಲಿ ಮಾತ್ರ ವಿವಾಹವನ್ನು ನಡೆಸಲಾಗುವುದು.

5) ವಧು-ವರರ ತಂದೆ-ತಾಯಿಯವರು ನಿಧನರಾಗಿದ್ದಲ್ಲಿ ಅವರ ವಾರಸುದಾರರ ಸಂಪೂರ್ಣ ಒಪ್ಪಿಗೆ ಇದ್ದು, ವಿವಾಹ ದಿನದಂದು ಅವರು ಕಡ್ಡಾಯವಾಗಿ ಹಾಜರಿರಬೇಕು. (ನಿಧನದ ಬಗ್ಗೆ ಮರಣ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಹಾಜರುಪಡಿಸುವುದು)

6) ವಧು-ವರರ ಕುಟುಂಬದ ಬಗ್ಗೆ ಕಡ್ಡಾಯವಾಗಿ ಪಡಿತರ ಚೀಟಿಯ (ರೇಷನ್ ಕಾರ್ಡ್) ಪ್ರತಿಯನ್ನು ಸಲ್ಲಿಸುವುದು.

7) ಸಾರ್ವಜನಿಕರಿಂದ ಯಾವುದೇ ದೂರು ಬಂದಲ್ಲಿ ಅಂತಹ ವಿವಾಹವಾಗುವ ವಧು-ವರರ ಬಗ್ಗೆ ಪುನರ್ ಪರಿಶೀಲಿಸುವುದು.

9) ಸರ್ಕಾರದ ನಿಯಮದಂತೆ ಗಂಡಿಗೆ ಕನಿಷ್ಠ 21 ವರ್ಷಗಳು ಹೆಣ್ಣಿಗೆ ಕನಿಷ್ಠ 18 ವರ್ಷಗಳು ತುಂಬಿರಬೇಕು. ವಯಸ್ಸಿನ ಬಗ್ಗೆ ಸರ್ಕಾರದ ಅಧಿಕೃತ ದಾಖಲೆಗಳನ್ನು ಸಲ್ಲಿಸುವುದು.

9) ವಿವಾಹ ನಡೆಯುವ ಸ್ಥಳದಲ್ಲಿ ವಿವಾಹ ನೋಂದಣಾಧಿಕಾರಿಗಳು ಮತ್ತು ಆಯಾಯ ಜಿಲ್ಲೆಯ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಸಂಬಂಧಪಟ್ಟ ಅಧಿಕಾರಿಗಳು ಹಾಜರಿದ್ದು, ಕಡ್ಡಾಯವಾಗಿ ವಿವಾಹ ನೋಂದಣಿ ಮಾಡಿಸುವ ಬಗ್ಗೆ ಅಗತ್ಯ ಕ್ರಮವಹಿಸುವುದು.

10) ವಧು-ವರರು ಅವರವರ ಸಂಪ್ರದಾಯಕ್ಕೆ ತಕ್ಕಂತೆ ಮದುವೆಗೆ ಅವಶ್ಯಕವಾದ ವಸ್ತುಗಳನ್ನು ವಧು-ವರರ ಕಡೆಯವರು ಮಾಡಿಕೊಳ್ಳುವುದು. (ಪಂಚೆ, ಶರ್ಟ್, ಶಲ್ಯ, ಧಾರೆ ಸೀರೆ, ರವಿಕೆ ಕಣ, ಪೇಟ, ಬಾಸಿಂಗ, ಟೋಪಿ, ಕಾಲುಂಗುರ ಇತ್ಯಾದಿ)

11) ವಧು-ವರರ ಕಡೆಯಿಂದ ಕಡ್ಡಾಯವಾಗಿ ಯಾವುದೇ ವಿಧವಾದ ವರದಕ್ಷಿಣೆಯನ್ನು ಪಡೆಯುವಂತಿಲ್ಲ.

12) ಸಾಮೂಹಿಕ ವಿವಾಹಕ್ಕೆ ಅಗತ್ಯವಿರುವ ವಸ್ತುಗಳನ್ನು ಸರ್ಕಾರಿ ಸೌಮ್ಯಕ್ಕೆ ಒಳಪಟ್ಟ ಸಂಸ್ಥೆಗಳಿಂದ ಅಥವಾ ಆಯಾಯ ಜಿಲ್ಲಾಧಿಕಾರಿಗಳ ಅನುಮತಿಯೊಂದಿಗೆ ನಿಯಮಾನುಸಾರ ಟೆಂಡರ್ ಕರೆದು ಖರೀದಿಸುವುದು.

13) ಸದರಿ ಕಾರ್ಯಕ್ರಮಕ್ಕೆ ಭಕ್ತಾದಿಗಳಿಂದಾಗಲೀ/ಸಾರ್ವಜನಿಕರಿಂದಾಗಲೀ ಚಂದಾ/ದೇಣಿಗೆ ವಸೂಲಿ ಮಾಡುವಂತಿಲ್ಲ.

14) ಸಾಮೂಹಿಕ ವಿವಾಹದಲ್ಲಿ ಭಾಗವಹಿಸುವ ವಧು-ವರರ ಮೊದಲನೇ ವಿವಾಹಕ್ಕೆ ಮಾತ್ರ ಅವಕಾಶ ಕಲ್ಪಿಸತಕ್ಕದ್ದು. ಎರಡನೇ ವಿವಾಹಕ್ಕೆ ಕಡ್ಡಾಯವಾಗಿ ಅವಕಾಶವಿರುವುದಿಲ್ಲ.

15) ಸಾಮೂಹಿಕ ವಿವಾಹಕ್ಕೆ ಸಲ್ಲಿಸುವ ದಾಖಲೆಗಳು ಸುಳ್ಳು ದಾಖಲೆಗಳೆಂದು ದೃಢಪಟ್ಟಲ್ಲಿ ಅಂತಹವರ ಮೇಲೆ ಕಾನೂನು ರೀತಿ ಕ್ರಮ ಕೈಗೊಳ್ಳುವುದು.

16) ಸಾಮೂಹಿಕ ವಿವಾಹಕ್ಕೆ ವಧು-ವರರೊಂದಿಗೆ ಎಷ್ಟು ಜನ ಬಂಧುಗಳು / ಪೋಷಕರು ಆಗಮಿಸುತ್ತಾರೆ ಎಂಬ ಬಗ್ಗೆ ಮುಂಚಿತವಾಗಿ ವಧು-ವರರಿಂದ ಮಾಹಿತಿ ಪಡೆದು ಅವರುಗಳಿಗೆ ದೇವಾಲಯದ ವತಿಯಿಂದ ಊಟೋಪಚಾರದ ವ್ಯವಸ್ಥೆ ಮಾಡುವುದು.

17) ವಧು-ವರರಿಗೆ ವಸ್ತ್ರಗಳಿಗಾಗಿ ಮತ್ತು ಪ್ರೋತ್ಸಾಹ ಧನವನ್ನಾಗಿ ನೀಡುವ ಮೊತ್ತವನ್ನು ಅವರವರ ಬ್ಯಾಂಕ್ ಖಾತೆಗಳಿಗೆ ವಿವಾಹದ ನಂತರ ನೇರವಾಗಿ ಜಮಾ ಮಾಡುವ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳುವುದು.

18) ಸಾಮೂಹಿಕ ವಿವಾಹದ ಸಂದರ್ಭದಲ್ಲಿ ದೇವಾಲಯದ ಆವರಣದಲ್ಲಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಹಾಗೂ ಶಾಂತಿಯನ್ನು ಕಾಪಾಡುವುದು. ಈ ಬಗ್ಗೆ ಸ್ಥಳೀಯ ಉಪ ಆರಕ್ಷಕ ಅಧೀಕ್ಷಕರ ಮಟ್ಟದ ಅಧಿಕಾರಿಗಳು ಜವಾಬ್ದಾರರಾಗಿರುತ್ತಾರೆ.

19) ಸಂಬಂಧಿಸಿದ ದೇವಾಲಯದ ಕಾರ್ಯನಿರ್ವಾಹಕ ಅಧಿಕಾರಿಗಳು/ ವ್ಯವಸ್ಥಾಪನಾ ಸಮಿತಿ / ಆಡಳಿತಾಧಿಕಾರಿಗಳು ವಿಧಿಸುವ ಇತರೆ ಷರತ್ತುಗಳು.

20) ಒಂದು ಜೋಡಿಗೆ ವಿವಾಹಕ್ಕೆ ಅವಶ್ಯವಿರುವ ವಸ್ತುಗಳನ್ನು ಖರೀದಿಸಲು ಮತ್ತು ಪ್ರೋತ್ಸಾಹ ಧನವನ್ನು ನೀಡಲು ಈ ಕೆಳಕಂಡಂತೆ ತಗಲುವ ಮೊತ್ತವನ್ನು ದೇವಾಲಯದ ನಿಧಿಯಿಂದ ಭರಿಸುವುದು.

| ಕ್ರ. ಸಂ | ವಿವರ | ಮೊತ್ತ |
|---|---|---|
| 1 | ವರನಿಗೆ ಪ್ರೋತ್ಸಾಹ ಧನ (ಹೂವಿನ ಹಾರ, ಪಂಚೆ, ಶರ್ಟ್ ಮತ್ತು ಶಲ್ಯಕ್ಕಾಗಿ) | 5,000 |
| 2 | ವಧುವಿಗೆ ಪ್ರೋತ್ಸಾಹ ಧನ (ಹೂವಿನ ಹಾರ, ಧಾರೆ ಸೀರೆ ಮತ್ತು ರವಿಕೆ ಕಣಕ್ಕಾಗಿ) | 10,000 |
| 3 | ವಧುವಿಗೆ ಚಿನ್ನದ ತಾಳಿ, ಎರಡು ಚಿನ್ನದ ಗುಂಡು (ಅಂದಾಜು 8 ಗ್ರಾಂ ತೂಕ) | 40,000 |
| | ಒಟ್ಟು | 55,000. |

4

21) ಸಾಮೂಹಿಕ ವಿವಾಹಕ್ಕೆ ಆಗಮಿಸುವ ವಧು-ವರರು ಮತ್ತು ಅವರ ಬಂಧುಗಳಿಗೆ / ಸಾರ್ವಜನಿಕರಿಗೆ ಊಟೋಪಚಾರ ಹಾಗೂ ಇತರೆ ಅವಶ್ಯಕ ವ್ಯವಸ್ಥೆಗಳನ್ನು ಮಾಡಲು ತಗಲುವ ವೆಚ್ಚಗಳನ್ನು ದೇವಾಲಯದ ನಿಧಿಯಿಂದ ನಿಯಮಾನುಸಾರ ಭರಿಸುವುದು.

22) ಆಯಾಯಾ ಜಿಲ್ಲಾಧಿಕಾರಿಗಳು ಈ ಕಾರ್ಯಕ್ರಮದ ಮೇಲುಸ್ತುವಾರಿಯನ್ನು ವಹಿಸಿಕೊಂಡು ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವುದು.

ಸಹಿ/-
ಆಯುಕ್ತರು
ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು.

ಪ್ರತಿ:-

1) ಎಲ್ಲಾ ಜಿಲ್ಲಾಧಿಕಾರಿಗಳು.
2) ಎಲ್ಲಾ ಪೊಲೀಸ್ ಕಮೀಷನರ್.
3) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಬೆಂಗಳೂರು.
4) ಎಲ್ಲಾ ಜಿಲ್ಲಾ ಸೂಪರಿಂಡೆಂಟ್ ಆಫ್ ಪೊಲೀಸ್.
5) ಎಲ್ಲಾ ಜಿಲ್ಲಾ ನೋಂದಣಾಧಿಕಾರಿಗಳು.
6) ಸಂಬಂಧಿಸಿದ ದೇವಾಲಯದ ಕಾರ್ಯನಿರ್ವಾಹಕ ಅಧಿಕಾರಿಗಳು/ವ್ಯವಸ್ಥಾಪನಾ ಸಮಿತಿ ಅಧ್ಯಕ್ಷರು/ ಆಡಳಿತಾಧಿಕಾರಿಗಳು/ಅನುವಂಶಿಕ ಮೋಕ್ತೇಸರರು.
7) ಎಲ್ಲಾ ಉಪವಿಭಾಗಾಧಿಕಾರಿಗಳು.
8) ಸಹಾಯಕ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು ನಗರ / ಗ್ರಾಮಾಂತರ / ಬಳ್ಳಾರಿ / ಬೆಳಗಾವಿ / ಮಂಗಳೂರು / ಕಾರವಾರ / ಉಡುಪಿ ಜಿಲ್ಲೆಗಳು.
9) ಎಲ್ಲಾ ತಾಲ್ಲೂಕು ತಹಶೀಲ್ದಾರ್.

ಪ್ರತಿ ಮಾಹಿತಿಗಾಗಿ:-

1) ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ (ಮುಜರಾಯಿ) ಬಹುಮಹಡಿಗಳ ಕಟ್ಟಡ, ಬೆಂಗಳೂರು.
2) ಮಾನ್ಯ ಮುಜರಾಯಿ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು ರವರಿಗೆ ಮಾಹಿತಿಗಾಗಿ.
3) ಈ ಕಛೇರಿಯ ಎಲ್ಲಾ ಶಾಖೆಗೆ
4) ರಕ್ಷಾ ಕಡತ.
5) ಹೆಚ್ಚುವರಿ.

ಆಯುಕ್ತರ ಪರವಾಗಿ,
ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು

ಕ

## ಅನುಬಂಧ

## ಧಾರ್ಮಿಕ ದತ್ತಿ ಇಲಾಖಾ ವ್ಯಾಪ್ತಿಗೆ ಒಳಪಡುವ 'ಎ' ಪ್ರವರ್ಗದ ಉತ್ತಮ ಆದಾಯ ಇರುವ ದೇವಾಲಯಗಳ ವಿವರ

| ಕ್ರ ಸಂ | ಜಿಲ್ಲೆ | ಕ್ರ ಸಂ | ದೇವಸ್ಥಾನದ ಹೆಸರು ವಿಳಾಸ |
|---|---|---|---|
| 1) | ಬೆಂಗಳೂರು ನಗರ | 1 | ಶ್ರೀ ಬನಶಂಕರಿ ದೇವಸ್ಥಾನ, ಎಸ್. ಕರಿಯಪ್ಪ ರಸ್ತೆ, ಬನಶಂಕರಿ |
| 2) | | 2 | ಶ್ರೀ ಕುಮಾರಸ್ವಾಮಿ ದೇವಸ್ಥಾನ ಮತ್ತು ಸಮೂಹ ದೇವಾಲಯಗಳು ಹನುಮಂತನಗರ |
| 3) | | 3 | ಶ್ರೀ ಗವಿಗಂಗಾಧರೇಶ್ವರಸ್ವಾಮಿ ದೇವಾಲಯ, ಗವಿಪುರಂ ಗುಟ್ಟಹಳ್ಳಿ |
| 4) | | 4 | ಶ್ರೀ ದೊಡ್ಡಗಣಪತಿ ದೇವಸ್ಥಾನ ಮತ್ತು ಮಲ್ಲಿಕಾರ್ಜುನ ದೇವಸ್ಥಾನ, ಬಸವನಗುಡಿ |
| 5) | | 5 | ಶ್ರೀ ಕಾಡು ಮಲ್ಲೇಶ್ವರಸ್ವಾಮಿ ದೇವಾಲಯ, ಮಲ್ಲೇಶ್ವರಂ |
| 6) | | 6 | ಶ್ರೀ ಮಿಂಟೋ ಆಂಜನೇಯಸ್ವಾಮಿ ದೇವಾಲಯ, ಚಾಮರಾಜಪೇಟೆ |
| 7) | | 7 | ಶ್ರೀ ವೇಣುಗೋಪಾಲಸ್ವಾಮಿ ದೇವಾಲಯ, ಮಲ್ಲೇಶ್ವರಂ |
| 8) | ಬಳ್ಳಾರಿ | 1 | ಶ್ರೀ ಮೈಲಾರಲಿಂಗೇಶ್ವರಸ್ವಾಮಿ ದೇವಾಲಯ, ಮೈಲಾರ, ಹೂವಿನ ಹಡಗಲಿ ತಾಲ್ಲೂಕು |
| 9) | | 2 | ಶ್ರೀ ಗುರು ಬಸವೇಶ್ವರ ದೇವಾಲಯ, ಕೊಟ್ಟೂರು, ಕೂಡ್ಲಿಗಿ ತಾಲ್ಲೂಕು |
| 10) | | 3 | ಶ್ರೀ ಕನಕದುರ್ಗಮ್ಮ ದೇವಸ್ಥಾನ, ಬಳ್ಳಾರಿ |
| 11) | | 4 | ಶ್ರೀ ದೊಡ್ಡಬಸವೇಶ್ವರಸ್ವಾಮಿ ದೇವಸ್ಥಾನ ಕುರುಗೋಡು ಗ್ರಾಮ ಬಳ್ಳಾರಿ ತಾಲ್ಲೂಕು |
| 12) | | 5 | ಶ್ರೀ ಮಲ್ಲಿಕಾರ್ಜುನ ಮತ್ತು ಬಸವೇಸ್ವರ ಸ್ವಾಮಿ ದೇವಾಲಯ, ಕುರುವತ್ತಿ ಹೂವಿನ ಹಡಗಲಿ ತಾ |
| 13) | | 6 | ಶ್ರೀ ಉತ್ಸವಾಂಬ ದೇವಸ್ಥಾನ, ಉಚ್ಚಂಗಿದುರ್ಗ, ಹರಪನಹಳ್ಳಿ ತಾ |
| 14) | ಬೆಳಗಾವಿ | 1 | ಶ್ರೀ ರೇಣುಕಾಯಲ್ಲಮ್ಮ ದೇವಸ್ಥಾನ, ಯಲ್ಲಮ್ಮನಗುಡ್ಡ, ಸವದತ್ತಿ ತಾಲ್ಲೂಕು |
| 15) | | 2 | ಶ್ರೀ ವೀರಭದ್ರ ದೇವಸ್ಥಾನ, ಗೊಡಚಿ, ರಾಮದುರ್ಗ ತಾಲ್ಲೂಕು. |
| 16) | | 3 | ಶ್ರೀ ಮಾಯಕ್ಕಾ (ಮಹಾಕಾಳಿ) ದೇವಸ್ಥಾನ, ಚಿಂಚಲಿ ಗ್ರಾಮ, ರಾಯಬಾಗ ತಾಲ್ಲೂಕು. |
| 17) | ಬೀದರ್ | 1 | ಶ್ರೀ ಮೈಲಾರ ಮಲ್ಲಣ್ಣ ದೇವಾಲಯ, ಭಾಲ್ಕಿ ತಾಲ್ಲೂಕು |
| 18) | | 2 | ಶ್ರೀ ವೀರಭದ್ರೇಶ್ವರ ದೇವಸ್ಥಾನ, ಚಾಂಗ್ಲೇರ, ಹುಮ್ನಾಬಾದ್ ತಾಲ್ಲೂಕು |
| 19) | | 3 | ಶ್ರೀ ವೀರಭದ್ರಶ್ವರ ದೇವಾಲಯ, ಪಂಚಕಮಿಟಿ, ಹುಮ್ನಾಬಾದ್ ತಾಲ್ಲೂಕು. |
| 20) | ಚಿತ್ರದುರ್ಗ | 1 | ಶ್ರೀ ಗುರು ತಿಪ್ಪೇರುದ್ರಸ್ವಾಮಿ ದೇ. ನಾಯಕನಹಟ್ಟಿ, ಚಳ್ಳಕೆರೆ ತಾಲ್ಲೂಕು |
| 21) | | 2 | ಶ್ರೀ ಕಾಲಭೈರವೇಶ್ವರ ದೇವಾಲಯ, ವದ್ದಿಗೆರೆ,ಹಿರಿಯೂರು ತಾಲ್ಲೂಕು |
| 22) | ಚಾಮರಾಜನಗರ | 1 | ಶ್ರೀ ಬಿಳಿಗಿರಿ ರಂಗನಾಥಸ್ವಾಮಿ ದೇವಸ್ಥಾನ, ಬಿಳಿಗಿರಿ ರಂಗನಬೆಟ್ಟ, ಯಳಂದೂರು ತಾಲ್ಲೂಕು |
| 23) | | 2 | ಶ್ರೀ ರಂಗನಾಥಸ್ವಾಮಿ ಸಮೂಹ ದೇವಸ್ಥಾನ, ಶಿವನಸಮುದ್ರ, ಕೊಳ್ಳೇಗಾಲ ತಾಲ್ಲೂಕು |

...2

| | | | |
|---|---|---|---|
| 24) | ಚಿಕ್ಕಮಗಳೂರು | 1 | ಶ್ರೀ ಕಳಸೇಶ್ವರಸ್ವಾಮಿ ದೇವಾಲಯ, ಕಳಸ, ಮೂಡಿಗೆರೆ ತಾಲ್ಲೂಕು |
| 25) | ದಕ್ಷಿಣ ಕನ್ನಡ | 1 | ಶ್ರೀ ಕುಕ್ಕೆ ಸುಬ್ರಹ್ಮಣ್ಯ ದೇವಾಲಯ, ಸುಬ್ರಹ್ಮಣ್ಯ, ಸುಳ್ಯ ತಾಲ್ಲೂಕು |
| 26) | | 2 | ಶ್ರೀ ಮಲ್ಲಿಕಾರ್ಜುನ ದೇವಸ್ಥಾನ, ತೋಡಿಕಾನ, ಸುಳ್ಯ ತಾಲ್ಲೂಕು |
| 27) | | 3 | ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಪುತ್ತೂರು, ದ.ಕ. |
| 28) | | 4 | ಶ್ರೀ ದುರ್ಗಾಪರಮೇಶ್ವರಿ ದೇ, ಕಟೀಲು, ಮಂಗಳೂರು ತಾಲ್ಲೂಕು |
| 29) | | 5 | ಶ್ರೀ ಸೋಮನಾಥ ದೇವಸ್ಥಾನ, ಸೋಮೇಶ್ವರ ಮಂಗಳೂರು ತಾ. |
| 30) | | 6 | ಶ್ರೀ ದುರ್ಗಾಪರಮೇಶ್ವರಿ ದೇವಾಲಯ, ಬಪ್ಪನಾಡು ಮಂಗಳೂರು ತಾ. |
| 31) | | 7 | ಶ್ರೀ ಸಹಸ್ರ ಲಿಂಗೇಶ್ವರ ದೇವಸ್ಥಾನ, ಉಪ್ಪಿನಂಗಡಿ, ಮಂಗಳೂರು ತಾಲ್ಲೂಕು |
| 32) | | 8 | ಶ್ರೀ ಅನಂತ ಪದ್ಮನಾಭ ದೇವಾಲಯ, ಕುಡುಪು ಮಂಗಳೂರು ತಾಲ್ಲೂಕು |
| 33) | | 9 | ಶ್ರೀ ಮಂಜುನಾಥ ದೇವಾಲಯ, ಕದ್ರಿ ಮಂಗಳೂರು ತಾಲ್ಲೂಕು |
| 34) | | 10 | ಶ್ರೀ ಮಂಗಳಾದೇವಿ ದೇವಸ್ಥಾನ, ಬೋಳಾರ ಮಂಗಳೂರು ತಾ. |
| 35) | | 11 | ಶ್ರೀ ನಂದನೇಶ್ವರ ದೇವಸ್ಥಾನ, ಪಣಂಬೂರು, ಮಂಗಳೂರು ತಾಲ್ಲೂಕು |
| 36) | | 12 | ಶ್ರೀ ಮಹಾಗಣಪತಿ ದೇವಸ್ಥಾನ, ಕಾಟಿಪಳ್ಳ, ಮಂಗಳೂರು ತಾಲ್ಲೂಕು |
| 37) | | 13 | ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಕಾವೂರು, ಮಂಗಳೂರು ತಾಲ್ಲೂಕು. |
| 38) | | 14 | ಶ್ರೀ ಕೊಡಮಂತಾಯ ದೈವಸ್ಥಾನ, ದೇಲಂತಬೆಟ್ಟು, (ಶಿಬರೂರು), ಮಂಗಳೂರು ತಾಲ್ಲೂಕು. |
| 39) | | 15 | ಶ್ರೀ ರಾಜರಾಜೇಶ್ವರಿ ದೇವಸ್ಥಾನ, ಪೊಳಲಿ, ಬಂಟ್ವಾಳ ತಾಲ್ಲೂಕು. |
| 40) | | 16 | ಶ್ರೀ ವಿನಾಯಕ ಶಂಕರನಾರಾಯಣ ದುರ್ಗಾಂಬ ದೇವಸ್ಥಾನ, ನಂದಾವರ, ಬಂಟ್ವಾಳ ತಾಲ್ಲೂಕು |
| 41) | | 17 | ಶ್ರೀ ಸೌತಡ್ಕ ಮಹಾಗಣಪತಿ ದೇವಾಲಯ, ಕೊಕ್ಕಡ, ಬೆಳ್ತಂಗಡಿ ತಾಲ್ಲೂಕು |
| 42) | | 18 | ಶ್ರೀ ಅನಂತೇಶ್ವರ ದೇವಸ್ಥಾನ, ಬಳ್ಳಮಂಜ, ಮಚ್ಚಿನ, ಬೆಳ್ತಂಗಡಿ ತಾ: |
| 43) | | 19 | ಶ್ರೀ ಪಣೋರ್ಲಆಬ್ಬೈಲ್ ಕಲ್ಲುರ್ಟಿ ದೇವಸ್ಥಾನ |
| 44) | | 20 | ಶ್ರೀ ಸೂರ್ಯನಾರಾಯಣ ದೇವಸ್ಥಾನ, ಮರೋಳಿ, ಮಂಗಳೂರು ತಾ. |
| 45) | ಗುಲ್ಬರ್ಗಾ | 1 | ಶ್ರೀ ದತ್ತಾತ್ರೇಯ ದೇವಸ್ಥಾನ, ಗಾಣಗಾಪುರ ಅಫಜಲಪುರ ತಾಲ್ಲೂಕು. |
| 46) | | 2 | ಶ್ರೀ ಭಾಗ್ಯವಂತಿ ದೇವಸ್ಥಾನ, ಘತ್ತರಗಾ, ಅಫಜಲಪುರ ತಾ. |
| 47) | | 3 | ಶ್ರೀ ರೇವಣಸಿದ್ದೇಶ್ವರ ದೇವಸ್ಥಾನ, ರೇವಗ್ಗಿ, ಚಿತ್ತಾಪುರ ತಾಲ್ಲೂಕು |
| 48) | ಯಾದಗಿರಿ | 1 | ಶ್ರೀ ಮೈಲಾರಲಿಂಗೇಶ್ವರ ದೇ., ಮೈಲಾರಪುರ, ಯಾದಗಿರಿ ತಾ: |
| 49) | ಹಾಸನ | 1 | ಶ್ರೀ ಚನ್ನಕೇಶವಸ್ವಾಮಿ ದೇವಸ್ಥಾನ, ಬೇಲೂರು |
| 50) | | 2 | ಶ್ರೀ ಹಾಸನಾಂಬ ದೇವಾಲಯ, ಹಾಸನ ನಗರ. |
| 51) | | 3 | ಶ್ರೀ ಚೌಡೇಶ್ವರಿ (ಪುರದಮ್ಮ) ದೇವಾಲಯ ಹಾಸನ |
| 52) | ಕೊಡಗು | 1 | ಶ್ರೀ ಭಾಗಮಂಡಲ ತಲಕಾವೇರಿ ದೇವಸ್ಥಾನ, ಭಾಗಮಂಡಲ, ಮಡಿಕೇರಿ ತಾಲ್ಲೂಕು. |

| | | | |
|---|---|---|---|
| 53) | ಕೊಪ್ಪಳ | 1 | ಶ್ರೀ ಹುಲಿಗೆಮ್ಮ ದೇವಾಲಯ, ಹುಲಿಗಿ, ಕೊಪ್ಪಳ ತಾಲ್ಲೂಕು. |
| 54) | | 2 | ಶ್ರೀ ಕನಕಾ ಚಲಪತಿ ದೇ. ಕನಕಗಿರಿ, ಗಂಗಾವತಿ ತಾಲ್ಲೂಕು |
| 55) | ಕೋಲಾರ | 1 | ಶ್ರೀ ಪ್ರಸನ್ನ ವೆಂಕಟರಮಣಸ್ವಾಮಿ ದೇ. ಚಿಕ್ಕತಿರುಪತಿ, ಮಾಲೂರು ತಾಲ್ಲೂಕು |
| 56) | | 2 | ಶ್ರೀ ಪ್ರಸನ್ನ ವೆಂಕಟರಮಣಸ್ವಾಮಿ ದೇವಾಲಯ, ಬಂಗಾರು ತಿರುಪತಿ, ಬಂಗಾರಪೇಟೆ ತಾಲ್ಲೂಕು. |
| 57) | ಮೈಸೂರು | 1 | ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಾಲಯ, ನಂಜನಗೂಡು |
| 58) | | 2 | ಶ್ರೀ ನಂಜರಾಜ ಬಹದ್ದೂರ್ ಛತ್ರ, ಮೈಸೂರು |
| 59) | | 3 | ಶ್ರೀ ವೈದ್ಯೇಶ್ವರಸ್ವಾಮಿ ದೇವಾಲಯ, ತಲಕಾಡು, ಟಿ. ನರಸೀಪುರ ತಾಲ್ಲೂಕು. |
| 60) | | 4 | ಶ್ರೀ ಚಾಮುಂಡೇಶ್ವರಿ ದೇವಾಲಯ ಮತ್ತು ಅರಮನೆ ಮುಜರಾಯಿ ದೇವಾಲಯಗಳು, ಮೈಸೂರು. |
| 61) | ರಾಯಚೂರು | 1 | ಶ್ರೀ ಸುಗೂರೇಶ್ವರಸ್ವಾಮಿ ದೇ., ದೇವಸೂಗೂರು, ರಾಯಚೂರು ತಾಲ್ಲೂಕು. |
| 62) | | 2 | ಶ್ರೀ ಅಂಬಾದೇವಿ ದೇವಸ್ಥಾನ, ಸೋಮಲಾಪೂರ, ಸಿಂಧನೂರು ತಾಲ್ಲೂಕು. |
| 63) | ರಾಮನಗರ | 1 | ಶ್ರೀ ರೇವಣ್ಣ ಸಿದ್ದೇಶ್ವರಸ್ವಾಮಿ ದೇ. ಅವ್ವೇರಹಳ್ಳಿ, ಕೈಲಾಂಚ ಹೋಬಳಿ, ರಾಮನಗರ ತಾ |
| 64) | | 2 | ಶ್ರೀ ಕೆಂಗಲ್ ಅಂಜನೇಯಸ್ವಾಮಿ ದೇ. ಕಸಬಾ ಹೋಬಳಿ, ಚನ್ನಪಟ್ಟಣ ತಾಲ್ಲೂಕು. |
| 65) | | 3 | ಶ್ರೀ ಕಬ್ಬಾಳಮ್ಮ ದೇವಸ್ಥಾನ, ಕಬ್ಬಾಳು, ಕನಕಪುರ ತಾಲ್ಲೂಕು |
| 66) | | 4 | ಶ್ರೀ ಲಕ್ಷ್ಮೀನರಸಿಂಹಸ್ವಾಮಿ ದೇವಸ್ಥಾನ, ಸಾವನದುರ್ಗ, ಮಾಗಡಿ ತಾಲ್ಲೂಕು. |
| 67) | ಶಿವಮೊಗ್ಗ | 1 | ಶ್ರೀ ರೇಣುಕಾಂಬ ದೇವಸ್ಥಾನ, ಚಂದ್ರಗುತ್ತಿ, ಸೊರಬ ತಾಲ್ಲೂಕು |
| 68) | ತುಮಕೂರು | 1 | ಶ್ರೀ ಸಿದ್ದಲಿಂಗೇಶ್ವರ ದೇವಾಲಯ, ಎಡೆಯೂರು, ಕುಣಿಗಲ್ ತಾಲ್ಲೂಕು. |
| 69) | | 2 | ಶ್ರೀ ಲಕ್ಷ್ಮೀನರಸಿಂಹ ದೇವಸ್ಥಾನ, ದೇವರಾಯನದುರ್ಗ, ತುಮಕೂರು ತಾಲ್ಲೂಕು. |
| 70) | | 3 | ಶ್ರೀ ಹುಲಿಯೂರಮ್ಮ ದೇವರು, ಹಳೇಊರು, ಕುಣಿಗಲ್ ತಾಲ್ಲೂಕು |
| 71) | ಉಡುಪಿ | 1 | ಶ್ರೀ ಮೂಕಾಂಬಿಕಾ ದೇವಾಲಯ, ಕೊಲ್ಲೂರು, ಕುಂದಾಪುರ ತಾ |
| 72) | | 2 | ಶ್ರೀ ಬ್ರಹ್ಮಲಿಂಗೇಶ್ವರ ದೇವಾಲಯ, ಮಾರಣಕಟ್ಟೆ, ಕುಂದಾಪುರ ತಾಲ್ಲೂಕು. |
| 73) | | 3 | ಶ್ರೀ ಬ್ರಾಹ್ಮಿ ದುರ್ಗಾಪರಮೇಶ್ವರಿ ದೇವಾಲಯ, ಕಮಲಶಿಲೆ, ಕುಂದಾಪುರ ತಾ |
| 74) | | 4 | ಶ್ರೀ ಜನಾರ್ಧನ ಮತ್ತು ಮಹಾಕಾಳ ದೇವಾಲಯ, ಅಂಬಲಪಾಡಿ, ಉಡುಪಿ ತಾಲ್ಲೂಕು. |
| 75) | | 5 | ಶ್ರೀ ಅನಂತೇಶ್ವರ ಚಂದ್ರಮೌಳೇಶ್ವರ ದೇವಾಲಯ, ಉಡುಪಿ, ಉಡುಪಿ ತಾಲ್ಲೂಕು. |
| 76) | | 6 | ಶ್ರೀ ಹೊಸ್ಮಮಾರಿ ಗುಡಿ ದೇವಾಲಯ, ಕಾಪು, ಉಡುಪಿ ತಾಲ್ಲೂಕು |
| 77) | | 7 | ಶ್ರೀ ಅನಂತಪದ್ಮನಾಭ ದೇವಾಲಯ, ಪೆರ್ಡೂರು, ಉಡುಪಿ ತಾಲ್ಲೂಕು. |

| | | | |
|---|---|---|---|
| 78) | | 8 | ಶ್ರೀ ದುರ್ಗಾಪರಮೇಶ್ವರಿ ದೇವಾಲಯ, ಮಂದಾರ್ತಿ, ಉಡುಪಿ ತಾಲ್ಲೂಕು |
| 79) | | 9 | ಶ್ರೀ ಮಹಾಲಿಂಗೇಶ್ವರ ದೇವಾಲಯ, ಪಡುಬಿದ್ರಿ, ಉಡುಪಿ ತಾಲ್ಲೂಕು |
| 80) | | 10 | ಶ್ರೀ ಮಹಿಷ ಮರ್ದಿನಿ ದೇವಾಲಯ, ನೀಲಾವರ, ಉಡುಪಿ ತಾಲ್ಲೂಕು |
| 81) | | 11 | ಶ್ರೀ ಅಮೃತೇಶ್ವರಿ ದೇವಸ್ಥಾನ, ಕೋಟ, ಉಡುಪಿ ತಾಲ್ಲೂಕು |
| 82) | | 12 | ಶ್ರೀ ವೀರಭದ್ರ ದೇವಸ್ಥಾನ, ಹಿರಿಯಡ್ಕ, ಉಡುಪಿ ತಾಲ್ಲೂಕು. |
| 83) | | 13 | ಶ್ರೀ ಮಹಿಷ ಮರ್ದಿನಿ ದೇವಸ್ಥಾನ, ಕಡಿಯಾಳ, ಉಡುಪಿ ತಾಲ್ಲೂಕು |
| 84) | | 14 | ಶ್ರೀ ದುರ್ಗಾಪರಮೇಶ್ವರಿ ದೇವಾಲಯ, ಮುಂಡ್ಕೂರು, ಕಾರ್ಕಳ ತಾಲ್ಲೂಕು. |

(ಕ.ಟಿ.ಆ.ಮೇ)

ಆಯುಕ್ತರ ಪರವಾಗಿ,
ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು



ಕರ್ನಾಟಕ ಸರ್ಕಾರ
ಆಯುಕ್ತರ ಕಾರ್ಯಾಲಯ, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ,
4ನೇ ಮಹಡಿ, ಶ್ರೀ ಮಿಂಟೋ ಆಂಜನೇಯಸ್ವಾಮಿ ಭವನ, ಆಲೂರು ವೆಂಕಟರಾವ್‌ರಸ್ತೆ, ಚಾಮರಾಜಪೇಟೆ, ಬೆಂಗಳೂರು
ದೂರವಾಣಿ:26709689/26706775 ಫ್ಯಾಕ್ಸ್ :26700801, Email : endowmentcommissioner@gmail.com

ಸಂಖ್ಯೆಎಡಿಎಂ 11/ಸಿಆರ್/136/2019-20 ದಿನಾಂಕ: 18.12.2019

## ಸೇರ್ಪಡೆ ಆದೇಶ

ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಗೆ ಒಳಪಡುವ ಪ್ರಮುಖ ದೇವಾಲಯಗಳಲ್ಲಿ ಸಾಮೂಹಿಕ ವಿವಾಹಗಳನ್ನು ನಡೆಸುವ ಕುರಿತು ಹೊರಡಿಸಿರುವ ಸಮ ಸಂಖ್ಯೆ ಸುತ್ತೋಲೆ ದಿನಾಂಕ:22.11.2019ರ ಅನುಬಂಧದಲ್ಲಿರುವ ದೇವಾಲಯಗಳ ಜೊತೆಗೆ ಸದರಿ ಸುತ್ತೋಲೆಯಲ್ಲಿ ವಿಧಿಸಿರುವ ಷರತ್ತುಗಳಿಗೊಳಪಡಿಸಿ ಈ ಕೆಳಕಂಡ 16 ದೇವಾಲಯಗಳನ್ನು ಸೇರ್ಪಡೆ ಮಾಡಿ ಆದೇಶಿಸಿದೆ.

| ಕ್ರ. ಸಂ | ಜಿಲ್ಲೆ | ಕ್ರ. ಸಂ | ದೇವಾಲಯದ ಹೆಸರು |
|---|---|---|---|
| 1 | ಬೆಂಗಳೂರು ನಗರ | 1. | ಹಲಸೂರು ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಾಲಯ |
| 2 | ಬೆಂಗಳೂರು ಗ್ರಾಮಾಂತರ | 2. | ಶ್ರೀ ಘಾಟಿ ಸುಬ್ರಹ್ಮಣ್ಯಸ್ವಾಮಿ ದೇವಾಲಯ, ಎಸ್.ಎಸ್.ಘಾಟಿ ದೊಡ್ಡಬಳ್ಳಾಪುರ ತಾಲ್ಲೂಕು |
| | | 3. | ಶ್ರೀ ಗಂಗಾಧರೇಶ್ವರಸ್ವಾಮಿ ಮತ್ತು ಹೊನ್ನಾದೇವಿ ದೇವಾಲಯ, ಶಿವಗಂಗೆ, ನೆಲಮಂಗಲ ತಾಲ್ಲೂಕು |
| 3 | ಬಳ್ಳಾರಿ | 4. | ಶ್ರೀ ಹಂಪಿ ವಿರೂಪಾಕ್ಷೇಶ್ವರಸ್ವಾಮಿ ದೇವಾಲಯ, ಹೊಸಪೇಟೆ |
| 4 | ಬೀದರ್ | 5. | ಶ್ರೀ ಝರಣಿ ನರಸಿಂಹಸ್ವಾಮಿ ದೇವಾಲಯ, ಬೀದರ್ ನಗರ |
| 5 | ಚಿತ್ರದುರ್ಗ | 6. | ಶ್ರೀ ಗವಿರಂಗನಾಥಸ್ವಾಮಿ ದೇವಾಲಯ |
| 6 | ಬಿಜಾಪುರ | 7. | ಶ್ರೀ ಸಿದ್ದೇಶ್ವರಸ್ವಾಮಿ ದೇವಾಲಯ, ಸಿದ್ದರಬೆಟ್ಟ |
| 7 | ಚಿಕ್ಕಬಳ್ಳಾಪುರ | 8. | ಶ್ರೀ ವಿಧುರಾಶ್ವತ್ಥ ನಾರಾಯಣಸ್ವಾಮಿ ದೇವಾಲಯ, ವಿಧುರಾಶ್ವತ್ಥ, ಗೌರಿಬಿದನೂರು ತಾಲ್ಲೂಕು |
| 8 | ಮಂಡ್ಯ | 9. | ಶ್ರೀ ರಂಗನಾಥಸ್ವಾಮಿ ದೇವಾಲಯ, ಶ್ರೀರಂಗಪಟ್ಟಣ |
| | | 10. | ಶ್ರೀ ನಿಮಿಷಾಂಬ ದೇವಾಲಯ, ಗಂಜಾಂ, ಶ್ರೀರಂಗಪಟ್ಟಣ ತಾಲ್ಲೂಕು |
| 9 | ದಾವಣಗೆರೆ | 11. | ಶ್ರೀ ಮಂಜುನಾಥ ನರಸಿಂಹಸ್ವಾಮಿ ದೇವಾಲಯ, ಸುಂಕದಕಟ್ಟೆ, ಹೊನ್ನಾಳ್ಳಿ ತಾಲ್ಲೂಕು |
| 10 | ಉತ್ತರ ಕನ್ನಡ | 12. | ಶ್ರೀ ಮಾರಿಕಾಂಬ ದೇವಾಲಯ, ಶಿರಸಿ |
| | | 13. | ಶ್ರೀ ವಿನಾಯಕ ದೇವಾಲಯ, ಇಡಗುಂಜಿ, ಹೊನ್ನಾವರ ತಾ |
| | | 14. | ಶ್ರೀ ದುರ್ಗಾಪರಮೇಶ್ವರಿ ದೇವಾಲಯ, ಅಳವೆಕೋಡಿ, ಶಿರಾಲಿ ಭಟ್ಕಳ ತಾಲ್ಲೂಕು |
| 11 | ಉಡುಪಿ | 15. | ಗುಡ್ಡೆಟ್ಟು ಶ್ರೀ ವಿನಾಯಕ ದೇವಾಲಯ, ಯಾಡ್ಯಾಡಿ, ಮತ್ಯಾಡಿ, ಉಡುಪಿ ತಾಲ್ಲೂಕು |
| | | 16. | ಶ್ರೀ ಸುಬ್ರಹ್ಮಣ್ಯ ದೇವಾಲಯ, ಗುಡ್ಡಮ್ಮಡಿ, ಸೇನಾಪುರ, ಕುಂದಾಪುರ ತಾಲ್ಲೂಕು |

(ಕರಡು ಪ್ರತಿ ಆಯುಕ್ತರಿಂದ ಅನುಮೋದಿತ)

ಆಯುಕ್ತರ ಪರವಾಗಿ
ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು.

ಪ್ರತಿ:-

1) ಎಲ್ಲಾ ಜಿಲ್ಲಾಧಿಕಾರಿಗಳು.
2) ಎಲ್ಲಾ ಪೋಲೀಸ್ ಕಮೀಷನರ್.

3) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಬೆಂಗಳೂರು.
4) ಎಲ್ಲಾ ಜಿಲ್ಲಾ ಸೂಪರಿಂಡೆಂಟ್ ಆಫ್ ಪೋಲೀಸ್.
5) ಎಲ್ಲಾ ಜಿಲ್ಲಾ ನೋಂದಣಾಧಿಕಾರಿಗಳು.
6) ಸಂಬಂಧಿಸಿದ ದೇವಾಲಯದ ಕಾರ್ಯನಿರ್ವಾಹಕ ಅಧಿಕಾರಿಗಳು/ವ್ಯವಸ್ಥಾಪನಾ ಸಮಿತಿ ಅಧ್ಯಕ್ಷರು/ ಆಡಳಿತಾಧಿಕಾರಿಗಳು/ಅನುವಶಂಶಿಕ ಮೋಕ್ತೇಸರರು.
7) ಎಲ್ಲಾ ಉಪವಿಭಾಗಾಧಿಕಾರಿಗಳು.
8) ಸಹಾಯಕ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು ನಗರ / ಗ್ರಾಮಾಂತರ / ಬಳ್ಳಾರಿ / ಬೆಳಗಾವಿ / ಮಂಗಳೂರು / ಕಾರವಾರ / ಉಡುಪಿ ಜಿಲ್ಲೆಗಳು.
9) ಎಲ್ಲಾ ತಾಲ್ಲೂಕು ತಹಶೀಲ್ದಾರ್.

ಪ್ರತಿ ಮಾಹಿತಿಗಾಗಿ:-

1) ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ (ಮುಜರಾಯಿ) ಬಹುಮಹಡಿಗಳ ಕಟ್ಟಡ, ಬೆಂಗಳೂರು.
2) ಮಾನ್ಯ ಮುಜರಾಯಿ ಸಚಿವರ ಆಪ್ತ ಕಾರ್ಯದರ್ಶಿಗಳು,. ವಿಧಾನಸೌಧ, ಬೆಂಗಳೂರು ರವರಿಗೆ ಮಾಹಿತಿಗಾಗಿ.
3) ಈ ಕಛೇರಿಯ ಎಲ್ಲಾ ಶಾಖೆಗೆ
4) ರಕ್ಷಾ ಕಡತ.
5) ಹೆಚ್ಚುವರಿ.

ಕ